## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 396
ಸದಸ್ಯರ ಹೆಸರು : ಶ್ರೀ ಲಹರ್ ಸಿಂಗ್ ಸಿರೋಯಾ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 11-12-2020

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ. | ಸಾರಿಗೆ ನಿಗಮಗಳಲ್ಲಿ ಬಸ್ ಮಾರ್ಗ ತಪಾಸಣೆ ವೇಳೆ ಸಣ್ಣ ತಪ್ಪು ಕಂಡು ಬಂದರೂ ನಿರ್ವಾಹಕರುಗಳನ್ನು ಅಮಾನತ್ತು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಸಾರಿಗೆ ನಿಗಮಗಳಲ್ಲಿ ಬಸ್ ಮಾರ್ಗ ತಪಾಸಣೆ ವೇಳೆ ಸಣ್ಣ ತಪ್ಪುಗಳಿಗೆ ನಿರ್ವಾಹಕರುಗಳನ್ನು ಅಮಾನತ್ತು ಮಾಡುತ್ತಿರುವುದಿಲ್ಲ. ಆದರೆ, ಗಂಭೀರ ಸ್ವರೂಪದ ಪ್ರಕರಣ ಕಂಡು ಬಂದಲ್ಲಿ ಮಾತ್ರ ಅಮಾನತ್ತುಗೊಳಿಸಲಾಗಿರುತ್ತದೆ. |
| ಆ. | 2020ನೇ ಸಾಲಿನಲ್ಲಿ ಅಮಾನತ್ತುಗೊಳಿಸಲಾದ ನಿರ್ವಾಹಕರುಗಳ ಸಂಖ್ಯೆ ಎಷ್ಟು; (ಹೆಸರುಗಳು ಮತ್ತು ಕಾರಣಗಳ ಸಹಿತ ಪೂರ್ಣ ವಿವರ ನೀಡುವುದು) | ನಾಲ್ಕೂ ಸಾರಿಗೆ ಸಂಸ್ಥೆಗಳಲ್ಲಿ 2020ನೇ ಸಾಲಿನಲ್ಲಿ ಅಮಾನತ್ತುಗೊಳಿಸಲಾದ ನಿರ್ವಾಹಕರುಗಳ ಸಂಖ್ಯೆ ಈ ಕೆಳಗಿನಂತಿದೆ:<br>ಸಂಸ್ಥೆಗಳು — ನಿರ್ವಾಹಕರುಗಳ ಸಂಖ್ಯೆ<br>ಕ.ರಾ.ರ.ಸಾ.ನಿಗಮ — 403<br>ಬೆಂ.ಮ.ಸಾ.ಸಂಸ್ಥೆ — 47<br>ವಾ.ಕ.ರ.ಸಾ.ಸಂಸ್ಥೆ — 99<br>ಈ.ಕ.ರ.ಸಾ.ಸಂಸ್ಥೆ — 201<br>ಅಮಾನತ್ತುಗೊಳಿಸಲಾದ ನಿರ್ವಾಹಕರುಗಳ ಹೆಸರುಗಳು ಮತ್ತು ಕಾರಣಗಳ ಸಹಿತ ಪೂರ್ಣ ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಇ. | ಅಮಾನತ್ತು ಮಾಡಲು ಇರುವ ಕಾನೂನಿನಲ್ಲಿರುವ ಅಂಶಗಳಾವುವು? (ವಿವರಗಳನ್ನು ಒದಗಿಸುವುದು) | ಸಾರಿಗೆ ನಿಗಮಗಳ ಚಾಲನಾ ಸಿಬ್ಬಂದಿಗಳನ್ನು ತಪಾಸಣೆಗೆ ಒಳಪಡಿಸಿ, ಸಂಸ್ಥೆಗಳ ಸ್ಥಾಯಿ ಆದೇಶಗಳಲ್ಲಿ ಅಸಾಧಾರಣ ಕೆಂಪು ಗುರುತಿನ ಪ್ರಕರಣವೆಂದು (ORMC) ವರ್ಗೀಕರಿಸಿರುವ ಗಂಭೀರ ಸ್ವರೂಪದ ದುರ್ವರ್ತನೆ/ದುರ್ನಡತೆಗಳನ್ನು ತಮ್ಮ ಕರ್ತವ್ಯದಲ್ಲಿ ಎಸಗಿದ ಪ್ರಕರಣಗಳಲ್ಲಿ ಮಾತ್ರ ತಪ್ಪಿತಸ್ಥರ ವಿರುದ್ಧ ಕ.ರಾ.ರ.ಸಾ.ನಿಗಮದ (ನಡತೆ ಮತ್ತು ಶಿಸ್ತು) ನಿಯಮಾವಳಿಗಳು 1971ರ ನಿಯಮ-21ರನ್ವಯ ಕಡ್ಡಾಯವಾಗಿ, ವಿಚಾರಣಾ ಪೂರ್ವ ಅಮಾನತ್ತುಗೊಳಿಸಲಾಗುತ್ತಿದೆ. |

ಸಂಖ್ಯೆ: ಟಿಡಿ 255 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು